# ಶೋಧಗಿರಿ

ಸಂಪಾದಕರು

ಡಾ. ಸುಮಾ ಆರ್.


## ಗಗನ ಪ್ರಕಾಶನ

ನಂ. ೮೮೩/ಬಿ, ೧೭ನೇ ಕ್ರಾಸ್

ರಾಮಾನುಜ ರಸ್ತೆ, ಕೆ.ಆರ್. ಮೊಹಲ್ಲಾ

ಮೈಸೂರು–೫೭೦ ೦೦೪

# Shodhagiri

Edited by: Dr. Suma R.
Professor, SJB College of Management Studies
BGS Group of Institution, BGS Health and Education City
Kengeri, Bangalore-60, Mob: 9986200213, 7892747921

Published by : GAGANA PRAKASHANA
No. 883/B, 17th Cross, Ramanuja Road
K.R. Mohalla Mysore-570 004

Inner Pages: Maplitho
Size: 1/8th Demmy
First impression: 2022
Pages: 184+iv = 188 Price: ₹ 200


ISBN: 978-81-954672-6-6

# ಶೋಧಗಿರಿ

ಮೊದಲನೇ ಮುದ್ರಣ: ೨೦೨೨
ಪುಟಗಳು: ೧೮೪+iv = ೧೮೮
ಬೆಲೆ: ₹ ೨೦೦

ಮುಖಪುಟ ವಿನ್ಯಾಸ: ಹೇಮಂತ್
ಪ್ರಕಾಶನ: ಗಗನ ಪ್ರಕಾಶನ
ನಂ. ೮೮೩/ಬಿ, ೧೭ನೇ ಕ್ರಾಸ್, ರಾಮಾನುಜ ರಸ್ತೆ
ಕೆ.ಆರ್. ಮೊಹಲ್ಲಾ, ಮೈಸೂರು-೫೭೦ ೦೦೪

ಮುದ್ರಣ: ಶ್ರೀ ವಿನಾಯಕ ಪ್ರಿಂಟರ್ಸ್, ಮೈಸೂರು-೫೭೦ ೦೦೪

# ಪರಿವಿಡಿ

# ೨. ವಡ್ಡಾರಾಧನೆ ಕತೆಗಳಲ್ಲಿ ಕಳ್ಳರು – ಕಳ್ಳತನ

– ಸುಂದ್ರೇಶ್ ಕೆ.ಎಸ್.

ಮನುಷ್ಯನ ಅಂತರ್ಯದಲ್ಲಿ ಹುಟ್ಟುವ ಆಸೆಯೋ, ಸಮಾಜದಲ್ಲಿ ಬದುಕುವಾಗ ಉಂಟಾಗುವ ಪರಿಸ್ಥಿತಿಯೊ ಕೆಲವು ವೇಳೆ ಕಾನೂನಿನಿಂದ ಅಥವಾ ನೈತಿಕವಾಗಿ ನಿಷೇಧಿಸಲ್ಪಟ್ಟ ಕ್ರಿಯೆಗಳು ನಡೆಯುತ್ತಿರುತ್ತವೆ ಅವುಗಳಲ್ಲಿ ಕಳ್ಳತನವೆಂಬುದು ಸಮಾಜದ ಉಗಮದೊಂದಿಗೆ ಕಂಡುಬಂದರೂ ಕಾಲಕ್ಕನುಗುಣವಾಗಿ ಅದು ಬೇರೆಬೇರೆ ರೂಪಾಂತರವನ್ನು ಹೊಂದುತ್ತಿದೆ.

ರಕ್ಷಣೆ, ಆರೋಪ, ಅಪರಾಧ ಮತ್ತು ಶಿಕ್ಷೆ ಇವುಗಳು ಜಗತ್ತಿನ ಎಲ್ಲಾ ಸಾಹಿತ್ಯಗಳಲ್ಲಿ ಕಂಡುಬಂದರೂ ದೇಶ, ಭಾಷೆ ಮತ್ತು ಪರಿಸ್ಥಿತಿಗಳಿಗನುಗುಣವಾಗಿ ಭಿನ್ನ ಸ್ವರೂಪದಲ್ಲಿ ವ್ಯಕ್ತವಾಗಿವೆ, ಅದಕ್ಕೆ ಕನ್ನಡ ಸಾಹಿತ್ಯವು ಹೊರತಲ್ಲ. ವಡ್ಡಾರಾಧನೆಯ ಅನೇಕ ಕತೆಗಳಲ್ಲಿ ಕಳ್ಳತನದ ಸನ್ನಿವೇಶಗಳು, ಕಳ್ಳರ ಜೀವನ ಕ್ರಮ ವಿಶಿಷ್ಟವಾದ ರೀತಿಯಲ್ಲಿ ಅಭಿವ್ಯಕ್ತಿ ಪಡೆದಿದೆ. ೬೪ ವಿದ್ಯೆಗಳಲ್ಲಿ ಕಳ್ಳತನವೂ ಒಂದಾಗಿದೆ. ಈ ವಿದ್ಯೆಯನ್ನು ಅನೇಕ ಜನ ಕ್ರಮಬದ್ಧವಾದ ರೀತಿಯಲ್ಲಿ ಕಲಿಯುತ್ತಿದ್ದರು.

ವಡ್ಡಾರಾಧನೆಯ ಮೊದಲನೇ ಕಥೆಯಾದ ಸುಕುಮಾರ ಸ್ವಾಮಿ ಕಥೆಯಲ್ಲಿ ವೈನಿಕನೆಂಬ ಕಳ್ಳ ಕನ್ಯೆಯ ಬಂಟನ ಮತ್ತು ಮುದುಕಿಯ ಚಿತ್ರಗಳನ್ನು ಜನರೆಲ್ಲರಿಗೂ ತೋರಿಸುತ್ತಾ ಅವರೆಲ್ಲರ ಗಮನವನ್ನು ಚಿತ್ರಗಳ ಕಡೆ ಸೆಳೆಯುತ್ತಿದ್ದರು. ಆ ಕ್ಷಣದಲ್ಲಿ ಅಲ್ಲೆ ಇದ್ದ ಇನ್ನೊಬ್ಬ ವೈಕನೆಂಬುವನು ಧಾನ್ಯವನ್ನು ಅರವತ್ತು ಬಳ್ಳವನ್ನು ಇಪ್ಪತ್ತು ಬಳ್ಳವೆಂದು(ಬಳ್ಳ=ಧವಸ ಧಾನ್ಯಗಳನ್ನು ಅಳೆಯುವ ಸಾಧನ) ಅಳೆದು ಜನರಿಗೆ ಮೋಸ ಮಾಡುತ್ತಿದ್ದ, ವ್ಯೋಮಕನೆಂಬ ಮತ್ತೊಬ್ಬ ರಾಶಿರಾಶಿ ಭತ್ತ ನೆಲಮಾಳಿಗೆಗೆ ಸುರಿದು ಕಡಿಮೆಯಾಗುವಂತೆ ಮಾಡುತ್ತಿದ್ದನು.

ಮಧ್ಯರಾತ್ರಿಯಲ್ಲಿ ಒಡವೆಗಳೊಂದಿಗೆ ತನ್ನ ಸೋದರ ಮಾವನಾದ ಧನದತ್ತನೆಂಬಲ್ಲಿಗೆ ಹೊರಟ ಸುಧಾಮೆಗೆ ಕಳ್ಳ ಎದುರುಗೊಳ್ಳುತ್ತಾನೆ, ಮೈತುಂಬ ಆಭರಣಗಳನ್ನು ಧರಿಸಿದ್ದ ಸುಧಾಮೆಯನ್ನು ನೋಡಿ ದೋಚದೆ ಆಕೆಯ ಮಾತನ್ನು ನಂಬಿ ಕಳುಹಿಸಿಕೊಡುವ ಪ್ರಸಂಗ ಮತ್ತು ಆಕೆ ವಾಪಸ್ಸು ಬಂದು ತಾನು ಧರಿಸಿದ್ದ ಆಭರಣಗಳನ್ನು ಕೊಡಲು ಹೋದಾಗ "ನನಗೇನು ಇದು ಒಂದೆ ಜನ್ಮವೇ? ನಿನ್ನ

ಆಭರಣಗಳನ್ನು ತೆಗೆದುಕೊಂಡು ನಾನೇನು ಚಂದ್ರಸೂರ್ಯ ನಕ್ಷತ್ರಗಳಿರುವ ತನಕ ಬದುಕಿರುವೆನೆ? ಎಣಿಕೆಮಾಡಿ ತೆಗೆದುಕೊಂಡ ಚಿನ್ನವು ಅಕ್ಷಯ ಸಂಪತ್ತಿನಂತೆ ನಾಶವಾಗದೆ ಇರುತ್ತದೆಯೆ? ನಿನ್ನಿಂದ ಆಭರಣಗಳನ್ನು ನಾನು ಪಡೆಯುವುದಿಲ್ಲ" ಎಂದೇಳುತ್ತಾನೆ. ಸುಕುಮಾರಸ್ವಾಮಿಯ ಕಥೆಯ ಉಪಕಥೆ ಸುಧಾಮೆಯ ಕಥೆಯಲ್ಲಿ ಬರುವ ಈ ಸನ್ನಿವೇಶ ಕಳ್ಳತನ ಮಾಡಿ ಬದುಕುತ್ತಿದ್ದ ಕಳ್ಳನು ಒಳ್ಳೆಯ ದಿಕ್ಕಿನಲ್ಲಿ ಆಲೋಚಿಸುತ್ತಿದ್ದರು ಎಂಬುದಕ್ಕೆ ಸಾಕ್ಷಿ.

ಸುಕುಮಾರಸ್ವಾಮಿ ಕಥೆಯಲ್ಲಿ ಹರಿಮುರದ ಗಂಭೀರೆ ಎಂಬ ಮುದುಕಿ ದಾರಿಯಲ್ಲಿ ಸಾಗುವಾಗ ಎದುರಾದ ಎಂಟು ಜನ ಕಳ್ಳರನ್ನು ತನ್ನ ನಯವಾದ ಮಾತುಗಳಿಂದ ದಿಕ್ಕುತಪ್ಪಿಸುತ್ತಾಳೆ. ಗಂಭೀರೆಯ ಚಾಣಾಕ್ಷತನ ಮತ್ತು ಜಾಣತನದಿಂದ ಮೋಸಹೋಗಿ ಕಳ್ಳರು ಕಷ್ಟಕ್ಕೆ ಸಿಲುಕುವ ಸಂದರ್ಭವನ್ನು ಕಾಣುತ್ತವೆ.

ಕಳ್ಳತನಕ್ಕೆ ಶಿಕ್ಷೆಯ ವಿಚಾರಗಳು ಪ್ರಸ್ತಾಪವಾಗುತ್ತವೆ. ಸುಮತಿಯ ಕಥೆಯಲ್ಲಿ(ಉಪಕಥೆ) ಅರಸ ತಳವಾರನನ್ನು ಕರೆದು ಬೇಗನೆ ಕಳ್ಳನನ್ನು ಪತ್ತೆ ಹಚ್ಚು ನಿನ್ನಿಂದ ಆಗದಿದ್ದರೆ ಕಳ್ಳನಿಗೆ ಮಾಡುವ ಶಿಕ್ಷೆಯನ್ನು ನಿನಗೆ ಮಾಡುವೆನು ಎಂದು ಗದರಿಸುತ್ತಾನೆ. ಇದೆ ರೀತಿ ವಿದ್ಯುಚ್ಚೋರನೆಂಬ ರಿಸಿಯ ಕಥೆಯಲ್ಲಿ ರಾಜ ಯಮದಂಡನೆಂಬ ತಳವಾರನಿಗೆ ಕಳ್ಳನನ್ನು ಕಂಡುಹಿಡಿದು ಮಾಲೆಯನ್ನು ತೆಗೆದುಕೊಂಡು ಬಾ, ಅದಲ್ಲವಾದರೆ ಕಳ್ಳನಿಗೆ ತಕ್ಕುದಾದ ದಂಡನೆಯನ್ನು ನಿನಗೆ ಮಾಡುತ್ತೇನೆ ಎನ್ನುತ್ತಾನೆ. ಅರಸನಿಗೆ ಕೆಲವು ಸಲ ದೂರುಗಳು ಹೋಗುತ್ತಿದ್ದವು ಇದಕ್ಕೆ ಶಿಕ್ಷೆಯನ್ನು ನೀಡಿದ ವಿಚಾರಗಳು ವಡ್ಡಾರಾಧನೆಯಲ್ಲಿವೆ. ವೈನಾಯಿಕ, ವೈಕ, ವ್ಯೋಮರಿಗೆ ಕಳ್ಳತನ ಮತ್ತು ಸುಳ್ಳಿನ ತಪ್ಪಿಗಾಗಿ ಮೂವರನ್ನು ಕೊಲ್ಲಲು ಆಜ್ಞೆ ಮಾಡುತ್ತಾನೆ. ರೈತರಿಗೆ, ಜನಸಾಮಾನ್ಯರಿಗೆ ಮಾಡುತ್ತಿದ್ದ ಮೋಸ ಬಯಲಾದಾಗ ರಾಜನು ವಿಧಿಸುತ್ತಿದ್ದ ಶಿಕ್ಷೆಯ ಕುರಿತು ವಡ್ಡಾರಾಧನೆಕಾರ ಹೇಳಿದ್ದಾನೆ.

ಕಳ್ಳತನಕ್ಕೆ ಪೂರ್ವನಿಯೋಜಿತರಾಗಿದ್ದರು ಕೆಲವು ಸಲ ವಿಫಲರಾದಾಗ ಬೇರೆ ಮನೆಯಕಳ್ಳತನ ಮಾಡುತ್ತಿದ್ದರು, ಗಂಭೀರೆ ಎಂಬ ಮುದುಕಿಯ ಮನೆಯ ಕಳ್ಳತನ ವಿಫಲವಾದಾಗ ಇಂದ್ರಜಾಲಿಗನ ಮನೆಯ ಕಳ್ಳತನ ಮಾಡುತ್ತಾರೆ.

ವಿದ್ಯುಚ್ಚೋರನೆಂಬ ರಿಸಿಯ ಕಥೆಯಲ್ಲಿ ವಿದ್ಯುಚ್ಚೋರನೆಂಬ ಕಳ್ಳ ಮತ್ತು ಕಳ್ಳತನದಲ್ಲಿ ಆತನ ಪ್ರಾವೀಣ್ಯತೆ ಪ್ರಸ್ತಾಪವಿದೆ. ಆತ ಜೃಂಭಿನಿ(ಪ್ರತ್ಯಕ್ಷವಾಗುವುದು ಮತ್ತು ಮಾಯವಾಗುವುದು) ಸ್ತಂಭಿನಿ(ಗತಿನಿರೋಧ) ಮೋಹಿನಿ(ಮೂರ್ಛೆಯನ್ನುಂಟು ಮಾಡುವುದು) ಸರ್ಪಿಣಿ(ವಿಷ ಪ್ರಯೋಗ) ತಾಳೋದ್ಘಾಟಿನಿ(ಬೀಗ ತೆಗೆಯುವ ವಿದ್ಯೆ) ಚೂರ್ಣ(ಪುಡಿ ಎರಚುವುದು)ಅಂಜನ(ಕಣ್ಣಿಗೆ ಹಚ್ಚುವ ಲೇಪನ) ಕಲಿತದ್ದನ್ನು ನೋಡಿದರೆ ಯಾವ ಯಾವ ಬಗೆಯಲ್ಲಿ ಕಳ್ಳರು ಜನರಿಗೆ ಮೋಸ ಮಾಡುತ್ತಿದ್ದರೆಂಬುದನ್ನು ಗ್ರಹಿಸಬಹುದು. ಕಳ್ಳರು, ವೈಶ್ಯರು, ಬಟ್ಟೆಯ ವ್ಯಾಪಾರಿಗಳು,

ಅಧಿಕಾರಿಗಳು, ಸಾಮಂತರು, ಹೆಚ್ಚು ಹಣ ತೆಗೆದುಕೊಳ್ಳುವ ಸೂಳೆಯರ ಬಳಿ ಕಳ್ಳತನ ಮಾಡುವುದಲ್ಲದೆ ರಾಜನ ಅರಮನೆಯ ವಸ್ತುಗಳನ್ನು ಕದಿಯುತ್ತಿದ್ದರು. ವಿದ್ಯುಚ್ಚೋರನೆಂಬ ಕಳ್ಳ ವಾಮರಥನ ಅರಮನೆಯ ಏಳನೆಯ ಉಪ್ಪರಿಗೆಯಲ್ಲಿದ್ದ 'ಸರ್ವರುಜಾಪಹಾರ'ವನ್ನು ಕದಿಯುತ್ತಾನೆ. ಅರಮನೆಯು ಕಳ್ಳರಿಗೆ ಹೊರತಾಗಿರಲಿಲ್ಲ. ವಿದ್ಯುಚ್ಚೋರ ಕಳ್ಳತನ ಮಾಡಿದ ವಸ್ತುಗಳನ್ನು ಒಂದು ಸ್ಥಳದಲ್ಲಿರಿಸುವುದು, ಹಗಲು ಹೊತ್ತಿನಲ್ಲಿ ತೊನ್ನಿನ ವೇಷ ಧರಿಸಿ ಜನರಿಂದ ಅನುಕಂಪಗಳಿಸಿ ರಾತ್ರಿ ವೇಳೆ ಕಳ್ಳತನ ಮಾಡುತ್ತಿದ್ದದ್ದು ಕಳ್ಳನ ಚಾಣಾಕ್ಷತನಕ್ಕೆ ಉತ್ತಮ ನಿದರ್ಶನವಾಗಿದೆ.

ಕೌಸಂಬಿ ಪಟ್ಟಣದ ಸುಮಿತ್ರಶೆಟ್ಟಿಯ ಮಗ ವಸುಮಿತ್ರನಿಗೆ ಹಾವುಕಚ್ಚಿ ಸತ್ತಾಗ ಅವನ ಕಾವಲಿಗೆ ನಾಲ್ಕು ಮಂದಿಯನ್ನು ಕಾವಲಿಗಿರಿಸುತ್ತಾನೆ. ಅದರಲ್ಲಿ ಒಬ್ಬ ಕುರಿಯನ್ನು ಕದಿಯುವುದು ಆ ಕಾಲದಲ್ಲಿ ಪ್ರಾಣಿಗಳನ್ನು ಕದಿಯುತ್ತಿದ್ದರೆಂಬುದಕ್ಕೆ ಸಾಕ್ಷಿ ಮತ್ತು ಇಂತಹ ಪ್ರಸಂಗಗಳು ವಡ್ಡಾರಾಧನೆಯಲ್ಲಿ ಸಾಕಷ್ಟು ಇವೆ, ಆಕಳುಗಳನ್ನು ಕದಿಯುವ ಸನ್ನಿವೇಶಗಳನ್ನು ಕಾಣಬಹುದು.

ವಡ್ಡಾರಾಧನೆಯ ಹದಿನೇಳನೆ ಕಥೆಯಾದ 'ಮಹೇಂದ್ರದತ್ತಾಚಾರ್ಯರ್ ಮೊದಲಾದ ಅಯ್ನೂರ್ವರ್ ರಿಸಿಯರ್ಕಳ ಕಥೆ'ಯಲ್ಲಿ ವ್ಯಾಳನೆಂಬ ಮಂತ್ರಿ ಕೋಶಾಗಾರದ ಮನೆಯಲ್ಲಿ ಕನ್ನ ಹಾಕಿಸಿ ಭಂಡಾರದ ದ್ರವ್ಯಗಳ ಪೆಟ್ಟಿಗೆಗಳನ್ನು ಒಡೆದು ದ್ರವ್ಯ ನಾಣ್ಯಗಳನ್ನು ಚಿನ್ನವನ್ನು ಆಭರಣಗಳನ್ನು ದಾರಿಯುದ್ದಕ್ಕೂ ಸಾಲಾಗಿ ಸುರಿಯುತ್ತ ನಟ್ಟಿರುಳಲ್ಲಿ ಕೊಂಡುಹೋಗಿ ಋಷಿಗಳಿರುವ ಬಸದಿಯೊಳಗೆ ಒಂದು ಕೋಣೆಯಲ್ಲಿ ರಾಶಿ ಹಾಕಿಟ್ಟು ಬಂದು ಬೆಳಗ್ಗೆ ರಾಜನಿಗೆ ಕಳ್ಳತನವಾಗಿದೆ ಎಂದೇ ಹೇಳುತ್ತಾನೆ. ಇದು ಹಳೆಯ ದ್ವೇಷವನ್ನು ತೀರಿಸಿಕೊಳ್ಳಲು ಕಳ್ಳತನವನ್ನು ಮಾಡಿ ಅದನ್ನು ಇನ್ನೊಬ್ಬರ ಮೇಲೆ ಹೊರಿಸುತ್ತಿದ್ದರು ಎಂಬುದರ ಗುರುತು.

ಭದ್ರಬಾಹು ಭಟಾರರ ಕಥೆಯಲ್ಲಿ ವ್ಯಾಪಾರಿಗಳು ಗುಂಪು-ಗುಂಪುಗಳಲ್ಲಿ ಧಾನ್ಯಗಳನ್ನು ವ್ಯಾಪಾರಕ್ಕೆ ಕೊಂಡೊಯ್ಯುತ್ತಿದ್ದರು. ಕಾರಣ ಕಳ್ಳರ ಕಳ್ಳತನದಿಂದ ತಪ್ಪಿಸಿಕೊಳ್ಳಲು. ಕಳ್ಳರು ದೂರದಿಂದ ಬರುವ ಜನರನ್ನು ಗುರುತಿಸಲು ಮರವನ್ನೇರಿ ಕುಳಿತುಕೊಳ್ಳುತ್ತಿದ್ದರು "ಬಟ್ಟೆಯೊಳ್ ಬರ್ಪ ಜನಮಂ ನೋಡಲ್ವೇಡಿ ಮರದ ತುತ್ತತುದಿಯನೇರಿ" ಎಂಬ ಸಾಲಿನಲ್ಲಿ ಈ ವಿಚಾರವಿದೆ.

'ರಾಜ್ಯಭಾರ ಮಾಡಬೇಕಾದ ರಾಜನೇ ಅಪ್ರಮಾಣಿಕನಾಗುತ್ತಾನೆ. ಕಳ್ಳತನ ಮಾಡಿದಾಗ ಆತ ರಾಜ್ಯದಲ್ಲಿ ತಾನಿರಬಾರದೆಂದು ಆ ನಗರವನ್ನು ತ್ಯಜಿಸಿ ಬೇರೊಂದು ಕಡೆ ಹೋಗುವ ಪ್ರಾಮಾಣಿಕ ತಳವಾರನ ಪ್ರಸ್ತಾಪ ವಿದ್ಯುಚ್ಚೋರನೆಂಬ ರಿಸಿಯ ಕಥೆಯಲ್ಲಿ ಬರುತ್ತದೆ. ಕಾನೂನು ಪಾಲನೆ ಮಾಡುವುದರ ಜೊತೆಗೆ ಕಾನೂನು ಮಾಡುವ ದೊರೆಯೇ ಕೆಟ್ಟಹಾದಿ ಹಿಡಿದಾಗ ಅದನ್ನು ಧಿಕ್ಕರಿಸಿ ವ್ಯವಸ್ಥೆಯಿಂದ ತಳವಾರನಾದವನು ದೂರವಿರುತ್ತಿದ್ದ ಎಂಬುದು ಈ ಘಟನೆಯಿಂದ ತಿಳಿಯುತ್ತದೆ.'

ಕಳ್ಳರು, ಕಳ್ಳತನ, ಶಿಕ್ಷೆ, ರಕ್ಷಣೆಗೆ ಸಂಬಂಧಿಸಿದಂತೆ, ಕಳ್ಳರ ಚಾಣಾಕ್ಷತನ, ಕಳ್ಳರನ್ನು ಹಿಡಿಯಲು ರಾಜನ ಆಜ್ಞೆ, ಅದಕ್ಕೆ ತಳವಾರನ ಅನೇಕ ಪ್ರಯತ್ನ, ಪ್ರಯತ್ನಗಳು ವಿಫಲವಾದಾಗ ತಳವಾರ ಚಿಂತಾಕ್ರಾಂತನಾಗುವುದು ಆ ಚಿಂತೆ ಬೇರೆಯವರ ಮೂಲಕ ಪರಿಹಾರವಾಗುವುದು. ಕಳ್ಳತನಕ್ಕೆ ವಿಧಿಸುವ ಶಿಕ್ಷೆ ಮುಂತಾದ ಹಲವು ಅಂಶಗಳು ಶಿವಕೋಟ್ಯಾಚಾರ್ಯರಿಂದ ರಚಿತವಾದ ವಡ್ಡಾರಾಧನೆಯಲ್ಲಿ ಅನೇಕ ಉಲ್ಲೇಖಗಳಿವೆ.

**ಕೊನೆಟಿಪ್ಪಣಿ:**


೧) ಡಾ. ಜಿ. ಆರ್. ತಿಪ್ಪೇಸ್ವಾಮಿ: ಆಧುನಿಕಪೂರ್ವ ಗದ್ಯಕೋಶ.

೨) ಡಾ ಡಿ. ಎಲ್. ನರಸಿಂಹಾಚಾರ್(ಸಂ): ವಡ್ಡಾರಾಧನೆ.

೩) ಟಿ. ಕೇಶವ ಭಟ್ಟ: ವಡ್ಡಾರಾಧನೆ ಗದ್ಯಾನುವಾದ.

೪) ಆರ್. ಎಲ್. ಅನಂತರಾಮಯ್ಯ: ವಡ್ಡಾರಾಧನೆ ಕಥಾಲೋಕ.



– ಸುಂದ್ರೇಶ್ ಕೆ.ಎಸ್.

ಸಂಶೋಧನಾ ವಿದ್ಯಾರ್ಥಿ

ಎಸ್.ಜೆ.ಬಿ.ಸಿ.ಎಂ.ಎಸ್., ಸಂಶೋಧನಾ ಕೇಂದ್ರ, ಕೆಂಗೇರಿ.


